ಸೀತಾರಾಮ ಜಾಗೀರ್‌ದಾರ್

# ಚಾಳುಕ್ಯ ಹಾಗೂ ಹೊಯ್ಸಳ ಮನೆತನಗಳ ಇತಿಹಾಸದ ಮೇಲೆ ಹೊಸ ಬೆಳಕು

ಕರ್ನಾಟಕದ ಹಿರಿಮೆ ಗರಿಮೆಗಳನ್ನು ಹಿಮಾಲಯದ ತಪ್ಪಲಿನ ನೇಪಾಲದಿಂದ ಹಿಂದೂಸಾಗರದ ಲಂಕಾ ದ್ವೀಪದವರೆಗೆ ಬೆಳೆಸಿದ ಕೀರ್ತಿ ಕಲ್ಯಾಣ ಚಾಳುಕ್ಯ ಮನೆತನದ್ದು. ಹೊಯ್ಸಳರು ವಿನಯಾದಿತ್ಯನ ಕಾಲ ದಿಂದ ಆ ಮನೆತನಕ್ಕೆ ಹೆಣ್ಣು ಕೊಟ್ಟು ತಂದವರು. ಅಂತೆಯೆ ಕರ್ನಾಟಕದ ಇನ್ನೊಂದು ಮಾಂಡಲಿಕ ಮನೆತನ ಮಂಗಳವೇಡೆಯ ಕಳಚುರಿಗಳದು ಕೂಡ. ಅರ್ಥಾತ್ ಚಾಳುಕ್ಯರು, ಕಳಚುರ್ಯರು ಮತ್ತು ಹೊಯ್ಸಳರು ಸಂಬಂಧಿಗಳು ; ಒಬ್ಬರಿಗೊಬ್ಬರು ನೆಂಟರು. ಅಂತೆಯೆ ಇನ್ನೂ ಕೆಲವು ರಾಜಮನೆತನಗಳೂ ಆ ಕಾಲದಲ್ಲಿ ಸಂಬಂಧಿಗಳೇ. ಚಾಳುಕ್ಯ ಚಕ್ರವರ್ತಿ ೬ನೆಯ ವಿಕ್ರಮಾದಿತ್ಯನ ಅನಂತರ ಆ ಮನೆತನದ ಕೀರ್ತಿ ಕಾಂತಿಯ ಬೆಳಕು ಕುಂದುತ್ತ ನಡೆಯಿತು. ಕರ್ನಾಟಕದ ಉತ್ತರದಲ್ಲಿ ನೆಂಟರಾದ ಕಳಚುರಿಗಳು, ಸೇಉಣರು ಮತ್ತು ಕಾಕತಿಯರು ಪ್ರಬಲರಾದರೆ ದಕ್ಷಿಣದಲ್ಲಿ ಹೊಯ್ಸಳರು ಅತ್ಯಂತ ಪ್ರಬಲರಾದರು ; ತಾವೇ ನಿಂತು ಬೆಳೆಸಿದ ಆ ಚಾಳುಕ್ಯ ಸಾಮ್ರಾಜ್ಯವನ್ನು ಮುರಿದು ಮಣ್ಣುಪಾಲು ಮಾಡಿದರು. ಕಲ್ಯಾಣದ ಚಾಳುಕ್ಯರ ಮನೆಯನ್ನು ಯಾರು ಮುರಿದರು ಎಂಬುದು ಈಗ ಚರಿತ್ರೆಯ ಪುಸ್ತಕಗಳಲ್ಲಿ ಒಂದು ಊದಾ ಪ್ರಪಂಚ- ಕಳಚುರಿಯರು ಮುರಿದರು, ಕಾಕತಿಯರು ಮುರಿದರು, ಇತ್ಯಾದಿ :

But a more formidable foe of the Chalukya was Kakatiya Rudradeva. The Anmakonda inscription of 1163 A.D. of this chief, states that *Taila III died of desease due to the fright of Rudra.* As the latest date of Taila III falls in the middle of 1162 A.D., he appears to have died about the end of that year. This was also the year when Bijjala finally declared himself as the soverign of the entire Chalukya Kingdom. The Harasur and Kalgi records of Bijjala's son Sovideva dated 1172-73 A.D., state in clear terms that this usurper put to death several members of the royal family of the Chalukyas. *It would not be surprising if Taila III was one of them.*[1]

ಚಾಳುಕ್ಯ ಚಕ್ರವರ್ತಿ ೩ನೆಯ ತೈಲಪನು ಹೇಗೆ, ಎಲ್ಲಿ ಸತ್ತನೆಂಬುದು ಸದ್ಯ ಚರಿತ್ರೆಗೆ ತಿಳಿಯದ ಸಂಗತಿ.

1. ಡಾ॥ ಪಿ. ಬಿ. ದೇಸಾಯಿ (ಸಂ.) : ಎ ಹಿಸ್ಟರಿ ಆಫ್ ಕರ್ನಾಟಕ (ಎರಡನೆಯ ಆವೃತ್ತಿ), ಧಾರವಾಡ, ೧೯೮೧, ಪು. ೧೯೦

ಆದರೆ ಇತ್ತೀಚೆಗೆ 'ಪ್ರಬುದ್ಧ ಕರ್ಣಾಟಕ' ಪತ್ರಿಕೆಯ ಸಂಪುಟ-೫೭, ಸಂಚಿಕೆ-೩ರಲ್ಲಿ 'ಶಾಸನಕವಿ ಮಾಧವ ವಿಬುಧ' (ಸಂಶೋಧನೆ) ಎಂಬೊಂದು ಲೇಖನ ಅಚ್ಚಾಗಿದೆ. ಈ ಶಾಸನ ಕವಿ ಮಾಧವ ವಿಬುಧನು ಹೊಯ್ಸಳ ದೊರೆ ೧ನೆಯ ನರಸಿಂಹನ ಆಸ್ಥಾನದಲ್ಲಿದ್ದ ವ್ಯಕ್ತಿ. ಈ ಶಾಸನವನ್ನು ಮೊದಲು ಓದಿದವರು ಬಿ. ಎಲ್. ರೈಸ್ ಸಾಹೇಬರು; ಅನಂತರ ಇದನ್ನು ಪರಿಷ್ಕರಿಸಿದವರು ಆರ್. ನರಸಿಂಹಾಚಾರ್ಯರು. ಈ ಇಬ್ಬರು ಮಹನೀಯರೂ ಈ ಶಾಸನವನ್ನು ಆದೇಕೆ ಸರಿಯಾಗಿ ಪ್ರಕಟಿಸಲಿಲ್ಲವೊ ತಿಳಿಯದು. ಅವರ ಕೈಯಲ್ಲೇ ಶಾಸನವು ಶುದ್ಧ ಸ್ವರೂಪದಲ್ಲಿ ಪ್ರಕಟ ವಾಗಿದ್ದರೆ ನಮ್ಮ ಇತಿಹಾಸ ಗ್ರಂಥಗಳಲ್ಲಿಯ ವಿವರಣೆಯು ದಾರಿಯೆ ಬೇರೆಯಾಗುತ್ತಿತ್ತು. ಆರ್. ನರಸಿಂಹಾ ಚಾರ್ಯರು ಸಿದ್ಧಪಡಿಸಿದ ಪಾಠ ಎಪಿಗ್ರಾಫಿಯ ಕರ್ನಾಟಿಕ, ಸಂಪುಟ ೧೫, ಬೇಲೂರು ಶಾಸನ ಸಂಖ್ಯೆ-೯೩ (ಪರಿಷ್ಕೃತ) ಎಂದು ಪ್ರಕಟವಾಗಿದೆ. ಹಳೇಬೀಡಿನ ಪ್ರಸಿದ್ಧ ದೇವಾಲಯವಾದ ಹೊಯ್ಸಳೇಶ್ವರ ದೇವಸ್ಥಾನ ದಲ್ಲಿಯೆ ಅಲ್ಲಿನ ನವರಂಗದಲ್ಲಿ ಇರುವ 'ಪ್ರೌಢದೇವ ರಾಯನ ಕಂಬ' ಎಂದು ಪ್ರಸಿದ್ಧವಾದ ಕಂಬದಲ್ಲಿಯೆ ಈ ಶಾಸನವನ್ನು ನಾಲ್ಕು ಮುಖಗಳಲ್ಲಿ ಬರೆಯಲಾಗಿದೆ. ಶಾಸನವು ಇಂದಿಗೂ ಸುಸ್ಪಷ್ಟವಾಗಿಯೆ ಇದೆ. ಈ ಶಾಸನವನ್ನು ಎಂ. ಹನುಮಂತರಾಯರು ಪುನಃ ಪರಿಷ್ಕರಿಸಿ ಪ್ರಕಟಿಸಿದ್ದಾರೆ.[2] ಶ್ರೀಯುತರು ಶಾಸನಕವಿ, ಗರುಡರ ಪ್ರಸಕ್ತಿ, ಶಾಸನ ಶೈಲಿ—ಈ ಬಗ್ಗೆ ವಿಶೇಷವಾಗಿ ಬರೆದಿದ್ದಾರೆ ವಿನಾ ಇದರಲ್ಲಿನ ಚಾರಿತ್ರಿಕ ಸಂಗತಿಯ ಬಗ್ಗೆ ಚರ್ಚಿಸುವುದಕ್ಕೆ ಹೋಗಿಲ್ಲ. ಈ ದಿಶೆಯಲ್ಲಿ ಶಾಸನದ ಕೆಳಗಿನ ಪಂಕ್ತಿಗಳು ತುಂಬ ಗಮನಾರ್ಹ ವಾಗಿವೆ :

ಪಂಕ್ತಿಗಳು :

ಪಶ್ಚಿಮ ಮುಖ :

೬೨ ಸುವ ಮಹಾಮಹಿಮನಪ್ಪ ಪ್ರತಾಪನಾರಸಿಂಹ

೬೩ ಹೊಯ್ಸಳ ಮಹೀಭುಜನ ಭುಜಪ್ರತಾಪವೆಂತೆಂದೊ

೬೪ ಡೆ॥ ಅನುಪಮ ಶೌರ್ಯ್ಯಮಂ ಮೆಱೆವನೆಂತಿದಿರಾಂತ ವಿ

೬೫ ರೋಧಿಭೂಪಪಾಂಡ್ಯನ ಬಳಗರ್ವ್ವಮಂ ಕಿಡಿಸಿ ತಂನ್ನೃಪಸೂ

೬೬ ನುವೆನಿಪ್ಪತೈಲನಂ ಘನ ನಿಶಿತಾಸಿಯಿಂ ತಱಿದುದ್ದೃತ್ತ [ರಂ][3]

೬೭ ಮುಱಿದಾ ವಿರೋಧಿಗೆಂತನುನಯದಿಂದಂ ಳವೊ

೬೮ ಪ್ಪುವುದೀ ನರಸಿಂಹ ಭೂಪನೊಳು ॥ ಯಿಂತೊಪ್ಪುವನೇಕಗು

೬೯ ಣಂಗಳಿನೊಪ್ಪುವ ಕಾವ್ಯ ಕಥಾನುಬಂಧದಿಂ ಸಂನುತಚಿತ್ತಂ ನಳೆ

೭೦ ನಹುಷಾದಿ ನೃಪಾಳಕರೀತನಂನಱಿಂದಿನದುಂಮಾಗಳುಂ ಹೊ

೭೧ ಗಳ್ವರೇಂ ಬುಧಧಾರಿಣಿ ಕೂಡೆಕೂರ್ತ್ತುಂ ಭೂವಿನುತನಂ ನೃಸಿಂ

೭೨ ಹನನಗುರ್ವ್ವಿನ ತೆಂಕಣಚಕ್ರವರ್ತ್ತಿಯುಂ ॥ವ॥ ಅಂತಾ ತೆಂಕಣ

2. ಪ್ರಬುದ್ಧ ಕರ್ಣಾಟಕ, ೫೭-೩, ಪು. ೧-೮ (ಮೇಲಚ್ಚು)

3. ಶಾಸನದ ಪಡಿಯಚ್ಚುಗಳನ್ನು ತಂದು ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಈಗ ಇರಿಸಿದೆ. ಇಲ್ಲಿನ ಕೆಲವು ಹೊಸ ಪಾಠಗಳನ್ನು ಹೊಸದಾಗಿ ಗುರುತಿಸಿರುವೆ.

೨೩ ಚಕ್ರವರ್ತ್ತಿ ದಿವ್ಯ ವಸ್ತ್ರಾಭರಣ ಮೂ4ಲ್ಯಾನುಲೇಪನಂಗಳಿನಲಂಕೃತ

೨೪ ನಾಗಿ ಲೀಲೆಯಿಂ ಬಂದೋಲಗಸಾಲೆಯೊಳೋಲಗಂಗೊಟ್ಟು ಕುಳಿ

೨೫ ಳ್ಳಿಪ್ಪುದಂ ಮಹಾಪ್ರಧಾನಪ್ರಕರ ಸೇನಾನಾಥಯೂ

೨೬ ಥ ಪ್ರಸಿದ್ಧ ಮಂತ್ರಿ ನಿಕರ ಪ್ರಮುಖ ನಿಖಿಳ ಪರಿಜನಂಗಳಿ

೨೭ [ದಂ]ದ ವಿಚಿತ್ರವಸ್ತ್ರಮಣಿ ಕನಕವಿಭೂಷಣ ಭೂಷಿತ

೨೮ ರಾಗಿ ಬಂದಾ ತೆಂಕಣ ಚಕ್ರವರ್ತ್ತಿಯೊಳ್ದಯೆ....ವ

೨೯ ಗ್ಗ್ಗದಿಂ ಪ್ರತಿಹಾರ ನಿರೂಪಿತ ಸ್ಥಳಂಗಳೊಳು ಕುಳ್ಳಿ

೩೦ ಪ್ಪುದುಂ ತದನಂತರಂ ತಾಳಗೀತ ವಾದ್ಯ ವಿದ್ಯಾವಿದರಂ ತರದಿಂ

೩೧ ಮೆಯ್ಯೊಳು ಮೆಚ್ಚಿಸೆ ಯಾದವ ಚಕ್ರವರ್ತ್ತಿ ಮೆಚ್ಚಿ ಮೆಚ್ಚು

೩೨ ಗೊಟ್ಟಾ ಸಮಯದೊಳ್ ಸಮಯಂಬಡೆದು ಸ್ವಾತಿಶ [ಯ]

೩೩ ಪ್ರಕಟಂ ಮಾಡಲಾಗಿ ರುಂಜೆಯ ಬಾವಂನವೀರರ ವೀರಗುಣ

೩೪ ಕಥಾಳಾಪಂಗಳಿಂ ಕವಿಗಮಕಿ ವಾದಿ ವಾಗ್ಮಿಗಳಾ ನರೇಂದ್ರನಂ ಮೆಚ್ಚಿ

೩೫ ಸಿ ಮೆಚ್ಚುವಡೆವುದಂ ಕಂಡಾ ಜೆಂನಮಲ್ಲಸ ರವಳಬೋವಂ

೩೬ ಗಂಡುಬೆಚ್ಚ್ಗ ಮಚ್ಚರಿಸಿಯಾ ನೂಱ ನಾಲ್ವರೊಳೊರ್ವ್ವನುಂ

೩೭ ಮೆಱೆಯದ ಪೂರ್ವ್ವವೀರದಿಂದೀ ತೆಂಕಣಚಕ್ರವರ್ತ್ತಿಯಂ ಪ್ರ

೩೮ ತಾಪನಾರಸಿಂಹದೇವಭೂಪನಂ ಮೆಚ್ಚಿಸಿ ಮೆಚ್ಚುವಡೆದು

೩೯ ಲೆಂಕತನಕ್ಕೆ ಬಿಂಕಮುಂ ಪಡೆದು ನಿರ್ಮ್ಮಳಕೀರ್ತ್ತಿಯಂ ಪಡೆವೆನೆಂದು

೪೦ ಪೂಣ್ದು ಬಳಿಕ್ಕಂ ॥....ಇತ್ಯಾದಿ

ಈ ಉಲ್ಲೇಖನದಲ್ಲಿ ೧ನೆಯ ನರಸಿಂಹನನ್ನು 'ತೆಂಕಣ ಚಕ್ರವರ್ತ್ತಿ' 'ಯಾದವ ಚಕ್ರವರ್ತ್ತಿ' ಎಂದು ಹೇಳಿದ ಸಂಗತಿಯಿಂದ ಆತನೇ ಹೊಯ್ಸಳ ವಂಶದಲ್ಲಿ ಮೊದಲ ಚಕ್ರವರ್ತಿಯೆಂಬುದು ಸ್ಪಷ್ಟವಿದೆ. ಆತ ಚಕ್ರವರ್ತಿ ಆದದ್ದು ಹೇಗೆಯೆಂದರೆ ತನ್ನ ಒಡೆಯನ ಮಗನಾದ ತೈಲಪನನ್ನು ತನ್ನ ಹರಿತವಾದ ಕತ್ತಿಯಿಂದ ಕತ್ತರಿಸಿ ಎಂಬುದೂ ಶಾಸನದ ಪಂಕ್ತಿ ೨೫-೨೬ರಲ್ಲಿ ಸ್ಪಷ್ಟವೇ ಇದೆ. ಈ ಘಟನೆ ಯಾವಾಗ ನಡೆದಿರಬಹುದು ಎಂಬುದನ್ನು ಶಾಸನದಲ್ಲಿ ಹೇಳದಿದ್ದರೂ ಪಟ್ಟದಕಲ್ಲಿನ ಶಾಸನವೊಂದರಲ್ಲಿ ಕ್ರಿ.ಶ. ೧೧೬೩ರ ಜೂನ್ ತಿಂಗಳದಲ್ಲಿ ಆ ತೈಲಪ ಚಕ್ರವರ್ತ್ತಿಯು ಬದುಕಿದ್ದುದೂ ಮತ್ತು ಕಳಚುರಿ ಬಿಜ್ಜಳನು ಅದೇ ಸುಮಾರಿಗೆ ತನ್ನನ್ನು ಚಕ್ರವರ್ತ್ತಿ ಎಂದು ಹೇಳಿಕೊಂಡುದುದೂ (ಹೂಲಿಯ ಶಾಸನಗಳು) ಗಮನಕ್ಕೆ ತಂದುಕೊಂಡರೆ ಈ ಘಟನೆಗಳು ಸುಮಾರು ಕ್ರಿ.ಶ. ೧೧೬೩ರಲ್ಲಿ ನಡೆದಿವೆಯೆಂದರೆ ತಪ್ಪಾಗುವುದಿಲ್ಲ. ಕಲ್ಯಾಣದ ಚಾಳುಕ್ಯ ಸಾಮ್ರಾಜ್ಯವನ್ನು ಒಡೆದು ಆಳಿದ ಮನೆತನಗಳಲ್ಲಿ ಕಳಚುರಿ ಬಿಜ್ಜಳ ಹಾಗೂ ಹೊಯ್ಸಳ ನರಸಿಂಹ(I) ಎನ್ನುವುದು ಈಗ ಬೆಣ್ಣೆಯಷ್ಟು ಬೆಳ್ಳಗಿದೆ. ಅಂತೆಯೆ ಇನ್ನು ಮುಂದೆ ೧ನೆಯ ನರಸಿಂಹನಿಗೆ ಚಕ್ರವರ್ತಿ ಎಂದು ಗೌರವಿಸಬೇಕಲ್ಲದೆ, ಇದುವರೆಗೆ ಬರೆದಂತೆ "ಇಮ್ಮಡಿ ವೀರ ಬಲ್ಲಾಳನು ಸಾಮ್ರಾಜ್ಯವನ್ನು ಸ್ಥಾಪಿಸಿದನು" ಎಂದು

4. 'ಮಾಲ್ಯಾನುಲೇಪನ' ಎಂದು ಓದಿಕೊಳ್ಳಬೇಕು.

ಮುಂತಾಗಿ ಬರೆಯುವುದು ಸರಿಯಲ್ಲವೆಂದೂ ಹೇಳ ಬೇಕಾಗಿದೆ. ಜೆ. ಡಿ. ಎಮ್. ಡೆರೆಟ್ ಅವರು ಹೊಯ್ಸಳರನ್ನು ಕುರಿತ ತಮ್ಮ ಪುಸ್ತಕದಲ್ಲಿ ಬರೆದಿರುವ "Narasimha missed, indeed, some splendid opportunities" ಮತ್ತು "Narasimha's achivements were almost entirely negative in character"[5] ಎನ್ನುವ ವಾಕ್ಯಗಳು ಈಗ ಸೂಕ್ತ ವಾಗಿ ಮಾರ್ಪಾಟುಗೊಳ್ಳಬೇಕಿದೆ. ಡೆರೆಟ್ ಅವರು ಸಹ ಈ ಶಾಸನದ ಸರಿಯಾದ ಪಾಠವನ್ನು ಗಮನಿಸಿದ್ದರೆ ಅವರ ಬರವಣಿಗೆಯ ರೂಪರೇಷೆಗಳೇ ಬದಲಾಗು ತ್ತಿದ್ದುವು.

೧ನೆಯ ನರಸಿಂಹನು ತನ್ನನ್ನು ಎಲ್ಲಿಯೂ 'ಕಳಚುರ್ಯರ ಮಾಂಡಲಿಕ' ಎಂದು ಹೇಳಿಕೊಂಡಿಲ್ಲ ; 'ಚಕ್ರವರ್ತಿ' ಎಂದು ಘೋಷಿಸಿಕೊಂಡವನು ಹಾಗೆ ಹೇಳಿ ಕೊಳ್ಳದೆ ಇದ್ದುದು ಸಹಜವೇ. ಕರ್ನಾಟಕ ದೇಶ ಕ್ರಿ.ಶ. ೧೧೬೨-೬೩ರಲ್ಲಿ ಎರಡು ಸಾಮ್ರಾಜ್ಯಗಳಲ್ಲಿ ಹರಿದು ಹಂಚಿಕೆಯಾಯಿತು ಎಂಬುದು ಇದೀಗ ನಾವು ದಾಖಲಿಸಬೇಕಾದ ಸಂಗತಿಯಾಗಿದೆ.

---

5. ದಿ ಹೊಯ್ಸಳಾಸ್, ಪು. ೭೫, ೭೯